ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ಕೋವಿಡ್-19ರ ಹಿನ್ನೆಲೆಯಲ್ಲಿ ಬಡವರಿಗೆ ಕೂಲಿ ನೀಡುವ MGNAREGA ಯೋಜನೆಯಡಿಯಲ್ಲಿ ಪಂಚಾಯತಿವಾರು ಕ್ರಿಯಾಯೋಜನೆ ರೂಪಿಸುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

09 (22) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) 2020-21ನೇ ಸಾಲಿನಲ್ಲಿ ಮಂಡ್ಯ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಕೋವಿಡ್-19ರ ಹಿನ್ನೆಲೆಯಲ್ಲಿ ಬಡವರಿಗೆ ಕೂಲಿ ನೀಡುವ ಒಉಓಂಖಇಉಂ ಯೋಜನೆಯಡಿಯಲ್ಲಿ ಪಂಚಾಯತಿವಾರು ಕ್ರಿಯಾಯೋಜನೆ ರೂಪಿಸಲಾಗಿದೆಯೇ; ರೂಪಿಸಿದಲ್ಲಿ ತಾಲ್ಲೂಕುವಾರು ಮತ್ತು ಪಂಚಾಯತಿವಾರು ಎಷ್ಟು ಮೊತ್ತದವರೆಗೆ ಕ್ರಿಯಾ ಯೋಜನೆ ತಯಾರಿಸಿದೆ; (ವಿವರ ನೀಡುವುದು)

(ಆ) ಕೋವಿಡ್-19ರ ಹಿನ್ನೆಲೆಯಲ್ಲಿ ಬಡವರಿಗೆ ಕೂಲಿ ನೀಡುವ ಮಹತ್ವಾಕಾಂಕ್ಷೆ ಯೋಜನೆ ಇದಾಗಿದ್ದು ನಾಗಮಂಗಲ ತಾಲ್ಲೂಕಿನಲ್ಲಿ ಈವರೆವಿಗೂ ಕ್ರಿಯಾ ಯೋಜನೆ ಅನುಷ್ಠಾನ ಆಗದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) 2020-21ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಿಂದ ನಾಗಮಂಗಲ ತಾಲ್ಲೂಕಿನಲ್ಲಿ ಈವರೆವಿಗೂ ಯಾವ ಯಾವ ಕಾರ್ಯಕ್ರಮಗಳು ಚಾಲ್ತಿಯಲ್ಲಿದೆ ; (ವಿವರ ನೀಡುವುದು)

(ಈ) ನಾಗಮಂಗಲ ತಾಲ್ಲೂಕಿನ ದೇವಲಾಪುರ ಹೋಬಳಿ ಲಕ್ಕೇಗೌಡನಕೊಪ್ಪಲುನಿಂದ ದೊಂದೆಮಾದಹಳ್ಳಿಗೆ ಸಂಪರ್ಕ ಕಲ್ಪಿಸುವ ರಸ್ತೆ ಯಾವ ಯೋಜನೆಯಲ್ಲಿ ಮಂಜೂರಾಗಿದೆ ; ಸದರಿ ಕಾಮಗಾರಿಯನ್ನು ಯಾರು ನಿರ್ವಹಿಸುತ್ತಿದ್ದಾರೆ ಮತ್ತು ಯಾವ ಹಂತದಲ್ಲಿದೆ;

(ಉ) ಇದೇ ಕಾಮಗಾರಿ ಕಾಡಾ ಯೋಜನೆಯಿಂದಲೂ ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಒಂದೇ ಕಾಮಗಾರಿಗೆ ಎರಡು ಇಲಾಖೆಗಳಿಂದ ಮಂಜೂರು ಮಾಡಿರುವ ಇಲಾಖಾ ಅಧಿಕಾರಿಗಳು ಮತ್ತು ನಿರ್ವಹಿಸುತ್ತಿರುವ ಗುತ್ತಿಗೆದಾರರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ?